# ಕರ್ನಾಟಕ ವಿಧಾನ ಪರಿಷತ್ತು
## 9ನೇ ಅಧಿವೇಶನ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 64 |
| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಎಂ. ನಾರಾಯಣ ಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 29.01.2021 |
| ಉತ್ತರಿಸುವವರು | : | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಇರುವ ವಿವಿಧ ಕಾರ್ಯಕ್ರಮಗಳೇನು; (ವಿವರ ನೀಡುವುದು) | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಇರುವ ವಿವಿಧ ಕಾರ್ಯಕ್ರಮಗಳನ್ನು **ಅನುಬಂಧದಲ್ಲಿ** ಲಗತ್ತಿಸಿದೆ. |
| ಆ | ಪ್ರಸಕ್ತ ಸಾಲಿನಲ್ಲಿ ರಾಜ್ಯದಲ್ಲಿ ಈ ಇಲಾಖೆಗೆ ಕಾಯ್ದಿರಿಸಿದ ಅನುದಾನವೆಷ್ಟು; | **ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯು** 2020-21ನೇ ಸಾಲಿನಲ್ಲಿ ಇಲಾಖೆಯ ವಿವಿಧ ಅನುಷ್ಠಾನಕ್ಕೆ ರೂ.18611.03/-ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ.<br>**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು**<br>ಪ್ರಸಕ್ತ ಸಾಲಿನಲ್ಲಿ ನಿಗಮಕ್ಕೆ ರೂ.13523.01 ಲಕ್ಷಗಳ ಅನುದಾನವನ್ನು ಕಾಯ್ದಿರಿಸಿದೆ.<br>**ಬಾಲಭವನ ಸೊಸೈಟಿಗೆ** ಬಿಡುಡೆಯಾದ ಅನುದಾನದ ವಿವರ |

| ಕ್ರ. ಸಂ | ಲೆಕ್ಕಶೀರ್ಷಿಕೆ | ನಿಗಧಿಪಡಿಸಿದ ಅನುದಾನ | ಬಿಡುಗಡೆ ಯಾದ ಅನುದಾನ |
|---|---|---|---|
| 1 | 2235-02-102-0-99-101 ಸಹಾಯಾನುದಾನ ವೇತನಗಳು ಸಾಮಾನ್ಯ | 176.14 | 117.42 |
| 2 | 2235-02-102-0-99-103 ಸಹಾಯಾನುದಾನ-ಸಾಮಾನ್ಯ | 816.00 | 316.00 |
| 3 | 2235-02-102-0-99-115 ಸಹಾಯಾನುದಾನ ಗುತ್ತಿಗೆ/ಹೊರಗುತ್ತಿಗೆ | 09.00 | 06.00 |

| | | |
|---|---|---|
| ಇ | ವಿವಿಧ ಅಭಿವೃದ್ಧಿ ಯೋಜನೆಗಳಿಗೆ ಬಿಡುಗಡೆ ಗೊಳಿಸಿರುವ ಅನುದಾನದ ಮೊತ್ತವೆಷ್ಟು; | **ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಿಂದ** 2020-21ನೇ ಸಾಲಿನ ಡಿಸೆಂಬರ್-2020ರ ಅಂತ್ಯಕ್ಕೆ ರೂ.9915.51/- ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br>**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು**<br>ಅಭಿವೃದ್ಧಿ ಯೋಜನೆಗಳಿಗೆ ಇದುವರೆಗೂ ಬಿಡುಗಡೆ ಗೊಳಿಸಿರುವ ಅನುದಾನ ರೂ.10008.16 ಲಕ್ಷಗಳು.<br>**ಬಾಲಭವನ ಸೊಸೈಟಿ**<br>2020-21ನೇ ಸಾಲಿನಲ್ಲಿ ಬೀದರ್ ಜಿಲ್ಲಾ ಬಾಲ ಭವನದ ಅಭಿವೃದ್ಧಿ/ದುರಸ್ಥಿ ಕಾಮಗಾರಿಗಾಗಿ ರೂ.9.89 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. |
| ಈ | ಇಲಾಖೆಯು ಅನುಷ್ಠಾನಗೊಳಿಸಿದ ಎಲ್ಲಾ ಯೋಜನೆಗಳು ಯಶಸ್ವಿಯಾಗಿವೆಯೇ; ವಿಫಲವಾಗಿರುವ ಯೋಜನೆಗಾಳಾವವು ಅದಕ್ಕೆ ಕಾರಣಗಳೇನು; | ಇಲಾಖೆಯು ಎಲ್ಲಾ ಯೋಜನೆಗಳನ್ನು ಯಶಸ್ವಿಯಾಗಿ ಅನುಷ್ಠಾನ ಗೊಳಿಸಿರುತ್ತದೆ. |
| ಉ | ಈ ಎಲ್ಲಾ ಯೋಜನೆಗಳು ಅನುಷ್ಠಾನಗೊಳಿಸುವಾಗ ಸರ್ಕಾರದ ನೀತಿ ನಿಯಮಗಳ ಅನುಸಾರ ರಚಿಸಿರುವ ಖರೀದಿ ಪ್ರಕ್ರಿಯೆಯ ಕಾಯ್ದೆಗಳನ್ನು ಪಾಲಿಸಲಾಗಿದೆಯೇ? (ಎಲ್ಲಾ ಯೋಜನೆಗಳಿಗೆ ಸಂಬಂಧಿಸಿದಂತೆ ವಿವರ ನೀಡುವುದು) | • ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ಶಾಲಾ ಪೂರ್ವ ಶಿಕ್ಷಣ ಕಿಟ್‌ಗಳ ಖರೀದಿ, ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರಿಗೆ ಸಮವಸ್ತ್ರ ಹಾಗೂ ಮೆಡಿಸನ್ ಕಿಟ್‌ಗಳ ಖರೀದಿ ಪ್ರಕ್ರಿಯೆಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 1999 ಹಾಗೂ ನಿಯಮಗಳು, 2000 ರನ್ವಯ ಇ-ಪ್ರಕ್ಯೂರ್‌ಮೆಂಟ್ ವೇದಿಕೆಯಲ್ಲಿ ಟೆಂಡರ್‌ನ್ನು ಆಹ್ವಾನಿಸಿ ಕ್ರಮವಹಿಸಲಾಗಿದೆ.<br>• ಪೋಷಣ್ ಅಭಿಯಾನ್ ಯೋಜನೆಯಡಿ ಅಂಗನವಾಡಿ ಕೇಂದ್ರಗಳಿಗೆ ತೂಕದ ಯಂತ್ರ ಹಾಗೂ ಮೊಬೈಲ್ ಪೋನ್‌ಗಳನ್ನು GeM ಮೂಲಕ ಖರೀದಿಸಲಾಗಿದೆ.<br>• ಎಲ್ಲಾ ಯೋಜನೆಗಳು ಅನುಷ್ಠಾನಗೊಳಿಸುವಾಗ ಸರ್ಕಾರದ ನೀತಿ ನಿಯಮಗಳ ಅನುಸಾರ ರಚಿಸಿರುವ ಖರೀದಿ ಪ್ರಕ್ರಿಯೆಯ ಕಾಯ್ದೆಗಳನ್ನು ಪಾಲಿಸಲಾಗಿದೆ. |

**ಸಂ:ಮಮಇ 22 ಸ್ವೀಮರ 2021**

**(ಶಶಿಕಲಾ ಅಣ್ಣಾಸಾಹೇಬ ಜೊಲ್ಲೆ)**
**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ**
**ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.**

## ಅನುಬಂಧ

### ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಇರುವ ವಿವಿಧ ಕಾರ್ಯಕ್ರಮಗಳ ವಿವರ

### 1. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**2020-21ನೇ ಸಾಲಿನಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಡಿ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮ/ಯೋಜನೆಗಳು, ಯೋಜನೆಗಳಿಗೆ ಕಾಯ್ದಿರಿಸಿದ ಅನುದಾನ ಹಾಗೂ ಬಿಡುಗಡೆಗೊಳಿಸಿರುವ ಅನುದಾನದ ವಿವರ. (ಅನುದಾನ ರೂ.ಲಕ್ಷಗಳಲ್ಲಿ)**

| ಕ್ರ. ಸಂ. | ಕಾರ್ಯಕ್ರಮದ ಹೆಸರು ಮತ್ತು ಲೆಕ್ಕ ಶೀರ್ಷಿಕೆ | 2020-21 ನೇ ಸಾಲಿನ ಅನುದಾನ ಹಂಚಿಕೆ | ಬಿಡುಗಡೆಯಾದ ಅನುದಾನ (ಡಿಸೆಂಬರ್-20ರ ಅಂತ್ಯಕ್ಕೆ) |
|---|---|---|---|
| **I. ಕೇಂದ್ರ ಪುರಸ್ಕೃತ ಯೋಜನೆಗಳು (ರಾಜ್ಯವಲಯ ಯೋಜನೆ)** | | | |
| 1 | ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರಿಗೆ ತರಬೇತಿ (CSS)(60:40) 2235-02-102-0-05-015 | 50.00 | 299.17 |
| 2 | ಉದ್ಯೋಗಿ ಮಾತೆಯರ ಮಕ್ಕಳಿಗಾಗಿ ಶಿಶುವಿಹಾರಗಳು (CSS:SS-60:40) 2235-02-102-0-13 | 500.00 | 136.16 |
| 3 | ಬೇಟಿ ಬಚಾವೋ ಬೇಟಿ ಪಡಾವೋ 2235-02-102-0-41 | 0.00 | 99.71 |
| 4 | ಕೇಂದ್ರ ಪುರಸ್ಕೃತ ಯೋಜನೆ-ಪೋಷಣ ಅಭಿಯಾನ (ರಾಷ್ಟ್ರೀಯ ಪೌಷ್ಟಿಕಾಂಶ ಅಭಿಯಾನ) 2235-02-102-0-43 | 12500.00 | 6396.45 |
| 5 | ಪ್ರಾಯಪೂರ್ವ ಬಾಲಕಿಯರ ಸಬಲೀಕರಣ ರಾಜೀವ್ ಗಾಂಧಿ ಯೋಜನೆ (ಸಬಲ) ಪೌಷ್ಠಿಕಾಂಶ (CSS: SS - 50:50) & ಪೌಷ್ಠಿಕೇತರಾಂಶ (CSS: SS - 60:40) 2235-02-103-0-46 | 712.00 | 20.31 |
| 6 | ಪ್ರಧಾನ ಮಂತ್ರಿ ಮಾತೃ ವಂದನಾ ಯೋಜನೆ (CSS: SS - 60:40) 2235-02-103-0-61-059 | 5700.00 | 10716.25 |
| 7 | ಸ್ವಾಧಾರ ಗೃಹ 2235-02-103-0-64-059 | 200.00 | 0.00 |
| 8 | ಉಜ್ವಲ ಯೋಜನೆ 2235-02-103-0-67 | 100.00 | 197.00 |
| 9 | ಅಂಗನವಾಡಿ ಕಟ್ಟಡಗಳ ಉನ್ನತೀಕರಣ 4235-02-102-1-03-125 | 1000.00 | 0.00 |

| | | | |
|---|---|---|---|
| **II. ಕೇಂದ್ರ ಪುರಸ್ಕೃತ ಯೋಜನೆಗಳು (ಜಿಲ್ಲಾವಲಯ ಯೋಜನೆ)** | | | |
| 1 | ಸಮಗ್ರ ಶಿಶು ಅಭಿವೃದ್ಧಿ ಯೋಜನೆ (ಜಿಲ್ಲಾ ಘಟಕ) (CSS:SS – 60:40) 2211-00-102-0-02 | 1212.66 | 806.37 |
| 2 | ಸಮಗ್ರ ಶಿಶು ಅಭಿವೃದ್ಧಿ ಯೋಜನೆ (204 ಶಿಶು ಅಭಿವೃದ್ಧಿ ಯೋಜನೆಯ ಆಡಳಿತ ವೆಚ್ಚ) (2211-00-102-0-22 (TP) CSS:SS - 60:40) | 156826.81 | 104530.88 |
| 3 | ಶಾಲಾ ಪೂರ್ವ ಮಕ್ಕಳ ಊಟದ ಯೋಜನೆ 2235-00-101-0-61 (TP) (CSS: SS - 50:50) | 197174.53 | 131447.25 |
| **III. ರಾಜ್ಯ ವಲಯ ಯೋಜನೆಗಳು** | | | |
| 1 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ಪ್ರಧಾನ ಕಛೇರಿ) 2235-02-001-0-01 | 2102.00 | 1719.32 |
| 2 | ಸಮಗ್ರ ಶಿಶು ಅಭಿವೃದ್ಧಿ ಯೋಜನೆ (H.O. Cell) 2235-02-102-0-04 | 265.00 | 212.66 |
| 3 | ಮಹಿಳಾ ಮತ್ತು ಮಕ್ಕಳ ಅನೈತಿಕ ಸಾಗಾಟಕ ನಿವಾರಣೆಯ ಯೋಜನೆ 2235-02-102-0-24-100 | 30.00 | 15.00 |
| 4 | ಭಾಗ್ಯಲಕ್ಷ್ಮಿ ಯೋಜನೆ 2235-02-102-0-25 | 10000.00 | 3873.68 |
| 5 | ಹೊಯ್ಸಳ ಮತ್ತು ಕೆಳದಿ ಚೆನ್ನಮ್ಮ ಪ್ರಶಸ್ತಿ 2235-02-102-0-27-117 | 30.00 | 15.00 |
| 6 | ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚಗಳನ್ನು ಭರಿಸುವ ಬಗ್ಗೆ (ಬಾಲಸಂಜೀವಿನಿ) 2235-02-102-0-30 | 200.00 | 100.00 |
| 7 | ಅಂಗನವಾಡಿಗಳ ನಿರ್ವಹಣೆ 2235-02-102-0-40 **(CSS: SS - 60:40)** | 1000.00 | 0.00 |
| 8 | ನಗರ ಅಂಗನವಾಡಿಗಳ ಮೇಲ್ದರ್ಜೆಕರಣ 2235–02–102–0–44 | 300.00 | 150.00 |
| 9 | ಮಕ್ಕಳ ಕಲ್ಯಾಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ ಸೇವೆ ಸಲ್ಲಿಸಿದ 2 ವ್ಯಕ್ತಿ ಹಾಗೂ 2 ಸಂಸ್ಥೆಗಳಿಗೆ ರಾಜ್ಯ ಪ್ರಶಸ್ತಿ –ಮಕ್ಕಳ ದಿನಾಚರಣೆ 2235–02–102–0–99–100 | 15.00 | 15.00 |

| | | | |
|---|---|---|---|
| 10 | ಮಹಿಳಾ ದಿನಾಚರಣೆ 2235-02-102-0-99-100 | 35.00 | 10.00 |
| 11 | ಸ್ತ್ರೀಶಕ್ತಿ ಯೋಜನೆ 2235-02-103-0-41 | 702.00 | 393.00 |
| 12 | ಕೌಟುಂಬಿಕ ದೌರ್ಜನ್ಯದ ವಿರುದ್ಧ ಮಹಿಳೆಯರಿಗೆ ರಕ್ಷಣೆ ನೀಡುವ ಯೋಜನೆ 2235-02-103-0-52 | 704.00 | 513.97 |
| 13 | ಬಾಲಕಿಯರ ವಸತಿ ನಿಲಯ 2235-02-103-0-99-100 | 495.00 | 247.50 |
| 14 | ಹೆಚ್‌ಐವಿ / ಏಡ್ಸ್ ಬಾಧಿತರಾದ ಮಹಿಳೆಯರಿಗೆ ಆಶ್ರಯ ಒದಗಿಸುವ ಯೋಜನೆ 2235-02-103-0-99-100 | 5.00 | 2.50 |
| 15 | ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಮರಣ ಪರಿಹಾರ ನಿಧಿ 2235-02-103-0-99-100 | 100.00 | 50.00 |
| 16 | ರಾಜ್ಯ ಮಹಿಳಾ ನಿಲಯ ಮತ್ತು ಸ್ವೀಕಾರ ಕೇಂದ್ರ 2235-02-106-0-06 | 674.00 | 485.33 |
| 17 | ಅಂಗನವಾಡಿ ಕಾರ್ಯಕರ್ತೆಯರಿಗೆ ನೂತನ ಪಿಂಚನೆ ವ್ಯವಸ್ಥೆ 2235-60-103-0-01 | 1000.00 | 500.00 |
| 18 | ಅಂಗನವಾಡಿ ಕಟ್ಟಡಗಳ ನಿರ್ಮಾಣ (ಆರ್‌ಐಡಿಎಫ್-ನಬಾರ್ಡ್) 4235-02-102-0-01-436 | 5000.00 | 5000.00 |
| 19 | ಅಂಗನವಾಡಿ ಕಟ್ಟಡಗಳು ವಿಶೇಷ ಅಭಿವೃದ್ಧಿ ಯೋಜನೆ 4235-02-102-0-02-133 | 2000.00 | 0.00 |
| 20 | ಅಂಗನವಾಡಿ ಕಟ್ಟಡಗಳ ನಿರ್ಮಾಣ (ಐ.ಸಿ.ಡಿ.ಎಸ್. - ನರೇಗ) 4235-02-102-0-06 | 500.00 | 125.00 |
| 21 | ಸುಧಾರಣಾ ಸಂಸ್ಥೆಗಳ ಕಟ್ಟಡಗಳ ನಿರ್ಮಾಣ ಕಾಮಗಾರಿ 4235-02-106-1-01-139 | 550.00 | 0.00 |
| 22 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013ರಡಿ ಬಳಕೆಯಾಗದೆ ಇರುವ ಮೊತ್ತ 4235-02-102-0-05 | 332.00 | 330.00 |

| | | | |
|---|---|---|---|
| **IV. ಜಿಲ್ಲಾ ವಲಯ ಯೋಜನೆಗಳು** | | | |
| 1 | ನಿರ್ಗತಿಕ ಮಕ್ಕಳ ಕುಟೀರ ಯೋಜನೆ 2211-00-102-0-26 | 599.65 | 493.09 |
| 2 | ಅಂಗನವಾಡಿ ಕಟ್ಟಡ ನಿರ್ವಹಣೆ ಮತ್ತು ದುರಸ್ತಿ 2211-00-102-0-61 (TP) | 2500.00 | 2500.00 |
| 3 | ದುಡಿಯುವ ಮಹಿಳೆಯರ ಮಕ್ಕಳಿಗೆ ಶಿಶುಪಾಲನಾ ಕೇಂದ್ರ 2211-00-102-0-63 (TP) | 20.00 | 4.00 |
| 4 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಯೋಜನೆ (ಜಿಲ್ಲಾ ಸಿಬ್ಬಂದಿ ಮತ್ತು ಆಡಳಿತ) 2235-00-101-0-27 | 1087.94 | 784.53 |
| 5 | ಮುಖ್ಯ ಸೇವಕರು ಮತ್ತು ಗ್ರಾಮ ಸೇವಕರು 2235-00-101-0-31 | 7.42 | 5.09 |
| **ಒಟ್ಟು ಮೊತ್ತ** | | **406230.01** | **272194.22** |

## 2. ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ವಿಕಲಚೇತನರಿಗಾಗಿ ಜಾರಿಗೊಳಿಸುತ್ತಿರುವ ಯೋಜನೆಗಳು

**(ಎ) ಶೈಕ್ಷಣಿಕ:-**

**1) ಶ್ರವಣದೋಷವುಳ್ಳ ಮಕ್ಕಳಿಗಾಗಿ ವಸತಿಯುತ ಶಾಲೆಗಳು:**

ಶ್ರವಣದೋಷವುಳ್ಳ ಮಕ್ಕಳಿಗಾಗಿ ಮೈಸೂರು, ಕಲಬುರ್ಗಿ, ಬಳ್ಳಾರಿ, ಬೆಳಗಾವಿ ಜಿಲ್ಲೆಗಳಲ್ಲಿ 4 ಕಿವುಡು ಮಕ್ಕಳ ವಸತಿ ಶಾಲೆಗಳನ್ನು ಇಲಾಖಾವತಿಯಿಂದ ನಡೆಸಲಾಗುತ್ತಿದೆ. ಈ ಶಾಲೆಗಳಲ್ಲಿ ಮಕ್ಕಳಿಗೆ ಉಚಿತ ವಸತಿ, ಊಟ ಮತ್ತು ಶಿಕ್ಷಣವನ್ನು ನೀಡಲಾಗುತ್ತಿದೆ. ಈ ಪೈಕಿ ಶ್ರವಣದೋಷವುಳ್ಳ ಹೆಣ್ಣು ಮಕ್ಕಳಿಗಾಗಿ ಬೆಳಗಾವಿಯಲ್ಲಿ ಪ್ರತ್ಯೇಕ ವಸತಿ ಶಾಲೆ ಇರುತ್ತದೆ.

**2. ಅಂಧ ಮಕ್ಕಳಿಗಾಗಿ ವಸತಿಯುತ ಶಾಲೆಗಳು:**

ಅಂಧ ಮಕ್ಕಳಿಗಾಗಿ ಕಲಬುರ್ಗಿ, ಮೈಸೂರು, ದಾವಣಗೆರೆ ಹಾಗೂ ಹುಬ್ಬಳ್ಳಿಯಲ್ಲಿ ವಿಶೇಷ ಶಾಲೆಗಳನ್ನು ನಡೆಸಲಾಗುತ್ತಿದೆ. ಈ ಶಾಲೆಗಳಲ್ಲಿ ದೃಷ್ಟಿದೋಷವುಳ್ಳ ಮಕ್ಕಳಿಗೆ ಉಚಿತ ಊಟ, ವಸತಿ ಮತ್ತು ಶಿಕ್ಷಣವನ್ನು ನೀಡಲಾಗುತ್ತಿದೆ. ಈ ಪೈಕಿ ದೃಷ್ಟಿದೋಷವುಳ್ಳ ಹೆಣ್ಣು ಮಕ್ಕಳಿಗಾಗಿ ದಾವಣಗೆರೆಯಲ್ಲಿ ಪ್ರತ್ಯೇಕ ವಸತಿ ಶಾಲೆ ಇರುತ್ತದೆ.

**3. 1982ರ ರಾಜ್ಯ ಅನುದಾನ ಸಂಹಿತೆಯಡಿ ನಡೆಯುತ್ತಿರುವ ವಿಶೇಷ ಶಾಲೆಗಳು:**

(ಅ) 1982ರ ರಾಜ್ಯ ಅನುದಾನ ಸಂಹಿತೆಯಡಿ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ 34 ವಿಶೇಷ ಶಾಲೆ/ ತರಬೇತಿ ಕೇಂದ್ರಗಳನ್ನು ದೈಹಿಕ, ಅಂಧ, ಶ್ರವಣದೋಷ ಹಾಗೂ ಬುದ್ಧಿಮಾಂದ್ಯ ಮಕ್ಕಳಿಗಾಗಿ ನಡೆಸಲಾಗುತ್ತಿದೆ. ರಾಜ್ಯ ಸರ್ಕಾರದಿಂದ ಅನುದಾನವನ್ನು ಜಿಲ್ಲಾ ಪಂಚಾಯತ್ ಮೂಲಕ ಬಿಡುಗಡೆ ಮಾಡಲಾಗುತ್ತಿದೆ.

**ವಿಕಲಚೇತನರಿಗೆ ವೃತ್ತಿ ತರಬೇತಿ ಕೇಂದ್ರಗಳು:**

ಈ ಯೋಜನೆಯಡಿ ವಿವಿಧ ರೀತಿಯ ವಿಕಲಚೇತನರಿಗೆ ವೃತ್ತಿ ತರಬೇತಿಯನ್ನು ನೀಡುವುದಾಗಿದೆ. 1982ರ ರಾಜ್ಯ ಅನುದಾನ ಸಂಹಿತೆಯಡಿ 5 ವೃತ್ತಿ ತರಬೇತಿ ಕೇಂದ್ರಗಳನ್ನು ರಾಜ್ಯ ಸಹಾಯಾನುದಾನದಡಿ ಬೆಂಗಳೂರಿನಲ್ಲಿ 03 ಮತ್ತು ಮೈಸೂರಿನಲ್ಲಿ 02 ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ವಾಕ್ ಶ್ರವಣ ಕೇಂದ್ರವನ್ನು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿದೆ. ವೃತ್ತಿ ತರಬೇತಿ ಕೇಂದ್ರಗಳಲ್ಲಿ ವಿವಿಧ ರೀತಿಯ ವಿಕಲಚೇತನರಿಗೆ ಫಿಟ್ಟರ್, ಟರ್ನರ್, ಸರಳ ಇಂಜಿನಿಯರಿಂಗ್, ಚಿತ್ರ, ಹಗ್ಗ, ಚಾಪೆ ಹೆಣೆಯುವುದು ಹಾಗೂ ಪ್ಲಾಸ್ಟಿಕ್ ಮೌಲ್ಡಿಂಗ್ ತರಬೇತಿಯನ್ನು ನೀಡಲಾಗುತ್ತಿದೆ. ಪ್ರತಿ ತರಬೇತಿ ಕೇಂದ್ರದಲ್ಲಿ ವಾರ್ಷಿಕ 25 ಫಲಾನುಭವಿಗಳು ತರಬೇತಿ ಪಡೆಯಲು ಅವಕಾಶವಿರುತ್ತದೆ.

**(ಆ)ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ಯೋಜನೆ:**

ಈ ಯೋಜನೆಯಡಿ ಬುದ್ಧಿಮಾಂದ್ಯ (ಸೆರಬ್ರಲ್ ಪಾಲ್ಸಿ, ಆಟಿಸಂ), ದೃಷ್ಟಿದೋಷ, ಶ್ರವಣದೋಷವುಳ್ಳ ಮಕ್ಕಳಿಗಾಗಿ ವಸತಿಯುತ ಹಾಗೂ ವಸತಿರಹಿತ ಶಾಲೆಗಳು ಸೇರಿದಂತೆ ಒಟ್ಟು 138 ವಿಶೇಷ ಶಾಲೆಗಳು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಯುತ್ತಿವೆ. ಮಕ್ಕಳ ಸಂಖ್ಯೆಗೆ ಅನುಗುಣವಾಗಿ ಶ್ರವಣದೋಷವುಳ್ಳ ಹಾಗೂ ದೃಷ್ಟಿದೋಷವುಳ್ಳ ಮಕ್ಕಳ ವಸತಿಯುತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.6200/- ರಂತೆ ಹಾಗೂ ವಸತಿರಹಿತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.5200/- ರಂತೆ ಹಾಗೂ ಬುದ್ಧಿಮಾಂದ್ಯ ಮಕ್ಕಳ ಮಕ್ಕಳ ವಸತಿಯುತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.6800/- ರಂತೆ ಹಾಗೂ ವಸತಿರಹಿತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ. 6000/- ರಂತೆ ವರ್ಷದಲ್ಲಿ 10 ತಿಂಗಳ ಅವಧಿಗೆ ಅನುದಾನವನ್ನು ಮಂಜೂರು ಮಾಡಲಾಗುತ್ತಿದೆ. ಈ ಅನುದಾನದಲ್ಲಿ ಶಿಕ್ಷಕರ ಗೌರವಧನ, ಮಕ್ಕಳ ಆಹಾರ ವೆಚ್ಚ, ಕಟ್ಟಡದ ಬಾಡಿಗೆ ಹಾಗೂ ನಿರ್ವಹಣಾ ವೆಚ್ಚ, ಸಮವಸ್ತ್ರ, ವೈದ್ಯಕೀಯ ವೆಚ್ಚ ಹಾಗೂ ಸಾದಿಲ್ವಾರು ವೆಚ್ಚಗಳು ಒಳಗೊಂಡಿರುತ್ತವೆ. 2019-20ನೇ ಸಾಲಿನಲ್ಲಿ ವಿವಿಧ ಅಂಗವಿಕಲತೆಗೆ ಒಳಪಟ್ಟ 9655 ವಿಕಲಚೇತನ ವಿದ್ಯಾರ್ಥಿಗಳು ಪ್ರಯೋಜನ ಪಡೆದಿರುತ್ತಾರೆ.

(ಇ) ಕೇಂದ್ರ ಸರ್ಕಾರದ ದೀನ್‌ದಯಾಳ್ ಪುನರ್ವಸತಿ ಯೋಜನೆಯಡಿ 8 ಸ್ವಯಂ ಸೇವಾ ಸಂಸ್ಥೆಗಳ ಮೂಲಕ ವಿಶೇಷ ಶಾಲೆ /ವೃತ್ತಿ ತರಬೇತಿ ಕೇಂದ್ರಗಳು ನಡೆಯುತ್ತಿದ್ದು, ಸದರಿ ಶಾಲೆ ಹಾಗೂ ತರಬೇತಿ ಕೇಂದ್ರಗಳಿಗೆ ಕೇಂದ್ರ ಸರ್ಕಾರದಿಂದ ಶೇ.90ರಷ್ಟು ಅನುದಾನವನ್ನು ಮಂಜೂರು ಮಾಡಲಾಗುತ್ತಿದ್ದು, ಉಳಿದ ಶೇ.10ರಷ್ಟು ವೆಚ್ಚವನ್ನು ಸಂಸ್ಥೆಯವರು ಭರಿಸಬೇಕಾಗಿರುತ್ತದೆ.

**4. ಅಂಗವಿಕಲ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹನ ಧನ:**

ಈ ಯೋಜನೆಯಡಿ ಒಂದನೇ ತರಗತಿಯಿಂದ ಸ್ನಾತಕೋತ್ತರ ಪದವಿಯವರೆಗೆ ವ್ಯಾಸಂಗ ಮಾಡುತ್ತಿರುವ ಅರ್ಹ ವಿಕಲಚೇತನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಆಯಾ ಜಿಲ್ಲಾ ಕಛೇರಿಗಳ ಮೂಲಕ ಮಂಜೂರು ಮಾಡಲಾಗುತ್ತಿದೆ. 2001-02ನೇ ಸಾಲಿನಿಂದ ಈ ಯೋಜನೆಯ ಫಲಾನುಭವಿಗಳಿಗೆ

ಆದಾಯ ಮಿತಿಯಿಂದ ವಿನಾಯಿತಿಗೊಳಿಸಲಾಗಿದೆ. 2019–20ನೇ ಸಾಲಿನಲ್ಲಿ ಒಟ್ಟು 23397 ವಿದ್ಯಾರ್ಥಿಗಳು ಪ್ರಯೋಜನವನ್ನು ಪಡೆದಿರುತ್ತಾರೆ.

5. **ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ ಯೋಜನೆ:**

ಸಾರ್ವತ್ರಿಕ ಪರೀಕ್ಷೆಗಳಲ್ಲಿ ಶೇಕಡ 60 ಕ್ಕಿಂತಲೂ ಹೆಚ್ಚಿನ ಅಂಕಗಳನ್ನು ಪಡೆದ ಪ್ರತಿಭಾನ್ವಿತ ವಿಕಲಚೇತನ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ ನೀಡುವ ಯೋಜನೆ ಇದಾಗಿದೆ. ಈ ಯೋಜನೆಯನ್ನು 2001–02ನೇ ಸಾಲಿನಿಂದ ಬಿ.ಎಡ್, ಎಂ.ಎಡ್. ಮತ್ತು ಟಿ.ಸಿ.ಹೆಚ್. ವಿದ್ಯಾರ್ಥಿಗಳಿಗೂ ವಿಸ್ತರಿಸಲಾಗಿದೆ. 2019–20ನೇ ಸಾಲಿನಲ್ಲಿ ಒಟ್ಟು 374 ವಿದ್ಯಾರ್ಥಿಗಳು ಪ್ರಯೋಜನವನ್ನು ಪಡೆದಿರುತ್ತಾರೆ.

**ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಶುಲ್ಕ ಮರುಪಾವತಿ:**

ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಎಸ್.ಎಸ್.ಎಲ್.ಸಿ ನಂತರ ಉನ್ನತ ಶಿಕ್ಷಣ, ವೃತ್ತಿ ಶಿಕ್ಷಣ, ತಾಂತ್ರಿಕ ಶಿಕ್ಷಣ, ಸ್ನಾತಕೋತ್ತರ, ಔದ್ಯೋಗಿಕ ಶಿಕ್ಷಣಗಳಿಗೆ ನಿಯಮಾನುಸಾರ ಆಯ್ಕೆಯಾಗುವ ವಿದ್ಯಾರ್ಥಿಗಳಿಗೆ ಸರ್ಕಾರವು ನಿಗದಿಪಡಿಸಿರುವ ಪರೀಕ್ಷಾ ಶುಲ್ಕ ಬೋಧನಾ ಶುಲ್ಕ, ಪ್ರಯೋಗಾಲಯ ಶುಲ್ಕ, ಕ್ರೀಡಾ ಶುಲ್ಕ ಹಾಗೂ ಗ್ರಂಥಾಲಯ ಶುಲ್ಕಗಳನ್ನು ಮರುಪಾವತಿಸುವ ಯೋಜನೆಯನ್ನು 2013–14ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಸೌಲಭ್ಯ ಪಡೆಯುವ ವಿದ್ಯಾರ್ಥಿಗಳಿಗೆ ಯಾವುದೇ ಆದಾಯಮಿತಿ ಇರುವುದಿಲ್ಲ. ವೈದ್ಯಕೀಯ ಮಂಡಳಿಯವರು ಶಿಫಾರಸ್ಸು ಮಾಡಿರುವ ವಿಕಲಚೇತನ ಅಭ್ಯರ್ಥಿಗಳು ಮಾತ್ರ ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ. 2019–20ನೇ ಸಾಲಿನಲ್ಲಿ ಒಟ್ಟು 3094 ವಿದ್ಯಾರ್ಥಿಗಳು ಪ್ರಯೋಜನವನ್ನು ಪಡೆದಿರುತ್ತಾರೆ.

6. **ಬ್ರೈಲ್ ಮುದ್ರಣಾಲಯ:**

ದೃಷ್ಟಿದೋಷವುಳ್ಳ ಮಕ್ಕಳಿಗೆ ಬೇಕಾಗುವ ಬ್ರೈಲ್ ಪುಸ್ತಕಗಳನ್ನು ಮುದ್ರಿಸಿ ಸಂಬಂಧಪಟ್ಟ ಅಂಧರ ಶಾಲೆಗಳಿಗೆ ಮೈಸೂರಿನಲ್ಲಿರುವ ಬ್ರೈಲ್ ಮುದ್ರಣಾಲಯದ ಮೂಲಕ ಉಚಿತವಾಗಿ ಸರಬರಾಜು ಮಾಡಲಾಗುತ್ತಿದೆ. 2019–20ನೇ ಸಾಲಿನಲ್ಲಿ ಒಟ್ಟು 7195 ಪುಸ್ತಕಗಳನ್ನು ಮುದ್ರಿಸಿ ಅಂಧ ಮಕ್ಕಳ ವಿಶೇಷ ಶಾಲೆಗಳಿಗೆ ಸರಬರಾಜು ಮಾಡಲಾಗಿರುತ್ತದೆ.

7. **ವಿಶೇಷ ಶಿಕ್ಷಣ ತರಬೇತಿ ಕೇಂದ್ರ ಯೋಜನೆ:**

ದೃಷ್ಟಿದೋಷವುಳ್ಳ ಹಾಗೂ ಶ್ರವಣದೋಷವುಳ್ಳ ವಿದ್ಯಾರ್ಥಿಗಳಿಗೆ ಬೋಧಿಸುವ ಶಿಕ್ಷಕರಿಗೆ ವಿಶೇಷ ಶಿಕ್ಷಣ ನೀಡಲು ತಲಾ ಒಂದರಂತೆ ವಿಶೇಷ ಶಿಕ್ಷಕರ ತರಬೇತಿ ಕೇಂದ್ರವನ್ನು ಮೈಸೂರಿನಲ್ಲಿ ನಡೆಸುತ್ತಿದ್ದು, ಪ್ರತಿ ವರ್ಷ ಪ್ರತಿ ಕೇಂದ್ರದಲ್ಲಿ 25 ಪ್ರಶಿಕ್ಷಣಾರ್ಥಿಗಳು ತರಬೇತಿ ಪಡೆಯುತ್ತಿದ್ದಾರೆ. 2019–20ನೇ ಸಾಲಿನಲ್ಲಿ 50 ಪ್ರಶಿಕ್ಷಣಾರ್ಥಿಗಳು ತರಬೇತಿಯನ್ನು ಪಡೆದಿರುತ್ತಾರೆ.

8. **ಮಾನಸಿಕ ಅಸ್ವಸ್ಥ, ಸೆರಬ್ರಲ್ ಪಾಲ್ಸಿ, ಆಟಿಸಂ ಮಕ್ಕಳ ಹಗಲು ಯೋಗಕ್ಷೇಮ ಕೇಂದ್ರಗಳು:** ಸೆರಬ್ರಲ್ ಪಾಲ್ಸಿ, ಆಟಿಸಂ, ಮಾನಸಿಕ ಅಸ್ವಸ್ಥ ಹಾಗೂ ತೀವ್ರತರದ ಅಂಗವೈಕಲ್ಯತೆ ಹೊಂದಿರುವ ಮೂರರಿಂದ 25 ವರ್ಷದ ಒಳಗಿನ ಮಕ್ಕಳಿಗಾಗಿ 02 ಹಗಲು ಯೋಗಕ್ಷೇಮ ಕೇಂದ್ರಗಳನ್ನು ಬೆಂಗಳೂರು ನಗರ ಜಿಲ್ಲೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸುತ್ತಿದ್ದು, ಪ್ರತಿ ಕೇಂದ್ರದಲ್ಲಿ 25 ಮಕ್ಕಳನ್ನು ದಾಖಲಿಸಲು ಅವಕಾಶವಿದ್ದು, ಪ್ರತಿ ಮಗುವಿಗೆ ಮಾಸಿಕ ರೂ. 10,000/–ಗಳಂತೆ ವಾರ್ಷಿಕ 25.00 ಲಕ್ಷಗಳನ್ನು ಮಂಜೂರು ಮಾಡಲಾಗುತ್ತಿದೆ.

(ಬಿ) ಉದ್ಯೋಗ ಮತ್ತು ತರಬೇತಿ:

2. ಅಂಗವಿಕಲ ಪುರುಷ ಹಾಗೂ ಮಹಿಳೆಯರ ವಸತಿನಿಲಯ:

ಬೆಂಗಳೂರಿನ ಕೆಂಗೇರಿಯಲ್ಲಿ ವಿಕಲಚೇತನ ಮಹಿಳೆ ಮತ್ತು ವಿಕಲಚೇತನ ಪುರುಷರಿಗಾಗಿ ಅಂಗವಿಕಲ ನೌಕರರು ಮತ್ತು ಪ್ರಶಿಕ್ಷಣಾರ್ಥಿಗಳಿಗೆ ಪ್ರತ್ಯೇಕವಾದ ಒಂದೊಂದು ವಸತಿ ನಿಲಯವನ್ನು ನಡೆಸಲಾಗುತ್ತಿದೆ. ಪುರುಷರ ವಸತಿ ನಿಲಯದಲ್ಲಿ 50 ನಿವಾಸಿಗಳು ಹಾಗೂ ಮಹಿಳೆಯರ ವಸತಿ ನಿಲಯದಲ್ಲಿ 50 ನಿವಾಸಿಗಳನ್ನು ದಾಖಲಿಸಲು ಅವಕಾಶವಿದೆ.

3. ಆಧಾರ ಯೋಜನೆ :

ವಿಕಲಚೇತನರು ಸ್ವಯಂ ಉದ್ಯೋಗ ಕೈಗೊಂಡು ಜೀವನ ಸಾಗಿಸಲು ಅನುಕೂಲವಾಗುವಂತೆ ಆಧಾರ ಎಂಬ ಸಾಲ ಯೋಜನೆಯನ್ನು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳ ನೇತೃತ್ವದಲ್ಲಿ ಜಾರಿಗೊಳಿಸಲಾಗುತ್ತಿದೆ. ಈ ಯೋಜನೆಯಡಿ ರೂ.1.00 ಲಕ್ಷ ರೂ.ಗಳ ಸಹಾಯಧನವನ್ನು ನೀಡಲು ಅವಕಾಶವಿದ್ದು, ಇದರಲ್ಲಿ ಶೇ.50ರಷ್ಟು ಬ್ಯಾಂಕ್ ಸಾಲ ಮತ್ತು ಶೇ.50ರಷ್ಟು ಸಹಾಯಧನ ಒದಗಿಸಲಾಗುವುದು. 2019-20ನೇ ಸಾಲಿನಲ್ಲಿ 289 ಫಲಾನುಭವಿಗಳು ಸೌಲಭ್ಯ ಪಡೆದಿರುತ್ತಾರೆ.

4. ಗ್ರಾಮೀಣ ಪುನರ್ವಸತಿ ಯೋಜನೆ:

ಈ ಯೋಜನೆಯನ್ನು ರಾಜ್ಯದ ಎಲ್ಲಾ 30 ಜಿಲ್ಲೆಗಳ 176 ತಾಲ್ಲೂಕುಗಳಲ್ಲಿ ಅನುಷ್ಠಾನ ಗೊಳಿಸಲಾಗುತ್ತಿದೆ. ಪ್ರತಿ ಗ್ರಾಮ ಪಂಚಾಯತಿ ಅಡಿಯಲ್ಲಿ ಎಸ್.ಎಸ್.ಎಲ್.ಸಿ. ಉತ್ತೀರ್ಣ/ ಅನುತ್ತೀರ್ಣರಾದ ಸಮರ್ಥ ವಿಕಲಚೇತನರನ್ನು ಗ್ರಾಮೀಣ ಪುನರ್ವಸತಿ ಕಾರ್ಯಕರ್ತರೆಂದು ಹಾಗೂ ತಾಲ್ಲೂಕು ಪಂಚಾಯಿತಿ ಕಚೇರಿಯಲ್ಲಿ ಸ್ಥಳೀಯ ಸಮರ್ಥ ಪದವೀಧರ ವಿಕಲಚೇತನರೊಬ್ಬರನ್ನು ವಿವಿಧೋದ್ದೇಶ ಪುನರ್ವಸತಿ ಕಾರ್ಯಕರ್ತರೆಂದು, ಸ್ಥಳೀಯ ನಗರ ಪ್ರದೇಶಗಳಲ್ಲಿ ನಗರ ಪುನರ್ವಸತಿ ಕಾರ್ಯಕರ್ತರೆಂದು ಮತ್ತು ನಿರ್ದೇಶನಾಲಯದಲ್ಲಿ ರಾಜ್ಯ ಸಂಯೋಜಕರನ್ನು ಗೌರವಧನ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲಾಗಿದೆ. ಈ ಕಾರ್ಯಕರ್ತರ ಮೂಲಕ ವಿಕಲಚೇತನರಿಗೆ ಎಲ್ಲಾ ಸೇವಾ ಸೌಲಭ್ಯಗಳನ್ನು ಅವರಿರುವ ಸ್ಥಳಗಳಲ್ಲಿಯೇ ವಿಕಲಚೇತನರ ಮೂಲಕವೇ ತಲುಪಿಸಲಾಗುವುದು. 2019-20ನೇ ಸಾಲಿನಲ್ಲಿ 5228 ಪುನರ್ವಸತಿ ಕಾರ್ಯಕರ್ತರು ಗೌರವಧನ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಸರ್ಕಾರದ ಆದೇಶ ಸಂಖ್ಯೆ:ಮಮಇ/241/ಪಿಹೆಚ್‌ಪಿ/2019, ದಿನಾಂಕ: 07-02-2020ರಂತೆ ಗ್ರಾಮೀಣ ಪುನರ್ವಸತಿ ಕಾರ್ಯಕರ್ತರು ಹಾಗೂ ನಗರ ಪುನರ್ವಸತಿ ಕಾರ್ಯಕರ್ತರುಗಳ ಗೌರವಧನವನ್ನು ರೂ.3000/-ಗಳಿಂದ ರೂ.6000/-ಗಳಿಗೆ ಹಾಗೂ ವಿವಿದ್ದೋದ್ದೇಶ ಪುನರ್ವಸತಿ ಕಾರ್ಯಕರ್ತರ ಗೌರವಧನವನ್ನು ರೂ.6000/-ಗಳಿಂದ ರೂ.12,000/-ಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಲಾಗಿದೆ.

ಮರಣ ಪರಿಹಾರ ನಿಧಿ ಯೋಜನೆ: ಈ ಯೋಜನೆಯಡಿ ಕಾರ್ಯಕರ್ತರು ನಿಧನ ಹೊಂದಿದ್ದಲ್ಲಿ ರೂ.50,000/-ಗಳ ಪರಿಹಾರ ಧನ ನೀಡಲು ಅವಕಾಶವಿದ್ದು, 12 ಮಂದಿಗೆ ಮರಣ ಪರಿಹಾರ ಧನವನ್ನು ನೀಡಲಾಗಿದೆ.

## 5. ಉದ್ಯೋಗಸ್ಥ ವಿಕಲಚೇತನ ಮಹಿಳೆಯರಿಗೆ ವಸತಿ ನಿಲಯಗಳು:

ಅಂಗವಿಕಲ ಉದ್ಯೋಗಸ್ಥ ಮಹಿಳೆಯರಿಗಾಗಿ ಹಾಗೂ ವಿದ್ಯಾರ್ಥಿನಿ/ತರಬೇತಾರ್ಥಿಗಳಿಗೆ ಸ್ವಯಂ ಸೇವಾ ಸಂಸ್ಥೆಗಳ ಮೂಲಕ 25 ಮಹಿಳಾ ವಸತಿ ನಿಲಯಗಳು (ಬೆಂಗಳೂರು ನಗರ ಜಿಲ್ಲೆಯಲ್ಲಿ 4 ವಸತಿ ನಿಲಯಗಳು ಸೇರಿದಂತೆ ಉಳಿದಂತೆ ರಾಮನಗರ, ದಾವಣಗೆರೆ, ರಾಯಚೂರು, ಉತ್ತರ ಕನ್ನಡ ಹಾಗೂ ಚಿಕ್ಕಮಗಳೂರು ಜಿಲ್ಲೆಗಳನ್ನು ಹೊರತುಪಡಿಸಿ) ನಡೆಯುತ್ತಿವೆ. ಸದರಿ ವಸತಿ ನಿಲಯದಲ್ಲಿ ಉದ್ಯೋಗಸ್ಥ ವಿಕಲಚೇತನ ಮಹಿಳೆಯರಿಗೆ ಹಾಗೂ ವಿದ್ಯಾರ್ಥಿನಿಯರಿಗೆ ವಸತಿ ಸೌಲಭ್ಯವನ್ನು ಕಲ್ಪಿಸಲಾಗಿದೆ. ಈ ವಸತಿ ನಿಲಯದಲ್ಲಿ ವಿದ್ಯಾರ್ಥಿನಿಯರು ಹಾಗೂ ತರಬೇತಿದಾರರಿಗೆ ಉಚಿತ ಊಟದ ವ್ಯವಸ್ಥೆಯಿದ್ದು, ಉದ್ಯೋಗಸ್ಥ ಮಹಿಳೆಯರು ಮಾಸಿಕ 800/-ಗಳನ್ನು ಪಾವತಿಸಬೇಕಾಗಿರುತ್ತದೆ. 2019-20ನೇ ಸಾಲಿನಲ್ಲಿ 887 ಫಲಾನುಭವಿಗಳು ಪ್ರಯೋಜನ ಪಡೆದಿರುತ್ತಾರೆ.

## ಸಿ. ಸಾಮಾಜಿಕ ಭದ್ರತಾ ಯೋಜನೆಗಳು:

### 1. ಸಮಾಜ ಸೇವಾ ಸಂಕೀರ್ಣ:

ನಿರ್ಗತಿಕ ಬುದ್ಧಿಮಾಂದ್ಯ ಪುರುಷರಿಗಾಗಿ ಸಮಾಜ ಸೇವಾ ಸಂಕೀರ್ಣ ಸಂಸ್ಥೆಯು ಬೆಂಗಳೂರಿನಲ್ಲಿ ಸರ್ಕಾರದ ವತಿಯಿಂದ ನಡೆಯುತ್ತಿದ್ದು, ಈ ಸಂಸ್ಥೆಯಲ್ಲಿ ಉಚಿತ ಊಟ, ವಸತಿ, ವೈದ್ಯಕೀಯ ಸೌಲಭ್ಯ, ಸಂರಕ್ಷಣೆ ಒದಗಿಸಲಾಗುತ್ತಿದೆ. ಪ್ರಸ್ತುತ ಸಂಸ್ಥೆಯಲ್ಲಿ 85 ನಿವಾಸಿಗಳು ದಾಖಲಾಗಿರುತ್ತಾರೆ.

### 2. ಮಂದಮತಿ ಮಹಿಳೆಯರ ಅನುಪಾಲನಾ ಗೃಹ:

18 ವರ್ಷ ಮೇಲ್ಪಟ್ಟ ನಿರ್ಗತಿಕ ಮಹಿಳಾ ಬುದ್ಧಿಮಾಂದ್ಯರಿಗೆ ಉಚಿತ ಊಟ, ವಸತಿ, ವೈದ್ಯಕೀಯ ಸೌಲಭ್ಯ ಮತ್ತು ಸಂರಕ್ಷಣೆ ಒದಗಿಸುವ ಉದ್ದೇಶದಿಂದ ಮಂದಮತಿ ಮಹಿಳೆಯರ ಅನುಪಾಲನಾ ಗೃಹಗಳನ್ನು ಬೆಂಗಳೂರು ನಗರ ಹಾಗೂ ಹುಬ್ಬಳ್ಳಿಯಲ್ಲಿ ಇಲಾಖಾವತಿಯಿಂದ ನಡೆಸಲಾಗುತ್ತಿದೆ. ಪ್ರಸ್ತುತ 100 ಮಂದಿ ಹಾಗೂ ಹುಬ್ಬಳ್ಳಿ ಅನುಪಾಲನ ಕೇಂದ್ರದಲ್ಲಿ 70 ನಿವಾಸಿಗಳು ದಾಖಲಾಗಿರುತ್ತಾರೆ.

### 3. ಮಾನಸಿಕ ಅಸ್ವಸ್ಥರಿಗೆ ಮಾನಸ ಕೇಂದ್ರಗಳು:

ಮಾನಸಿಕ ಅಸ್ವಸ್ಥರಿಗಾಗಿ ಮಾನಸ ಕೇಂದ್ರಗಳನ್ನು ಬೆಂಗಳೂರು ನಗರ ಹಾಗೂ ಬೆಳಗಾವಿ ಜಿಲ್ಲೆಗಳಲ್ಲಿ ನಡೆಸುತ್ತಿದ್ದು, ರಾಜ್ಯ ಉಚ್ಚ ನ್ಯಾಯಾಲಯ ಮತ್ತು ಅಧೀನ ನ್ಯಾಯಾಲಯಗಳಿಂದ ಆದೇಶಿಸಲ್ಪಡುವ ಮಾನಸಿಕ ಅಸ್ವಸ್ಥರನ್ನು ಹಾಗೂ ರಸ್ತೆಗಳಲ್ಲಿ ಓಡಾಡುವ ನಿರ್ಗತಿಕ ಮಾನಸಿಕ ಅಸ್ವಸ್ಥರನ್ನು ಈ ಕೇಂದ್ರಗಳಲ್ಲಿ ನಿರ್ದಿಷ್ಟ ವೈದ್ಯಕೀಯ ಪ್ರಾಧಿಕಾರದ ಆದೇಶದ ಮೇರೆಗೆ ದಾಖಲಿಸಲು ಅವಕಾಶವಿರುತ್ತದೆ. ಈ ಕೇಂದ್ರಗಳಲ್ಲಿ ಫಲಾನುಭವಿಗಳಿಗೆ ಉಚಿತ ಊಟ, ವಸತಿ, ವೈದ್ಯಕೀಯ ಶುಶ್ರೂಷೆ, ವೈದ್ಯಕೀಯ ಸಲಹೆ(ಕೌನ್ಸಲಿಂಗ್) ಸೌಲಭ್ಯವನ್ನು ನೀಡಲಾಗುತ್ತಿದ್ದು, ಇವು ಅಲ್ಪಾವಧಿ ಕೇಂದ್ರಗಳಾಗಿರುತ್ತವೆ. 2019-20ನೇ ಸಾಲಿನಲ್ಲಿ 50 ನಿವಾಸಿಗಳು ಪ್ರಯೋಜನ ಪಡೆದಿದ್ದಾರೆ.

### 4. ಬುದ್ಧಿಮಾಂದ್ಯ ಮಕ್ಕಳ ಪೋಷಕರಿಗೆ ವಿಮಾ ಯೋಜನೆ:

ಬುದ್ಧಿಮಾಂದ್ಯ ಮಕ್ಕಳ/ವ್ಯಕ್ತಿಗಳ ತಂದೆ: ತಾಯಿ: ಪೋಷಕರ ವಿಮಾ ಯೋಜನೆಯನ್ನು ಭಾರತೀಯ ಜೀವ ವಿಮಾ ನಿಗಮದ ಮೂಲಕ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಬುದ್ಧಿಮಾಂದ್ಯ ಮಕ್ಕಳ/ವ್ಯಕ್ತಿಗಳ ತಂದೆ:ತಾಯಿ: ಪೋಷಕರು ಮರಣ ಹೊಂದಿದ ನಂತರ ಬುದ್ಧಿಮಾಂದ್ಯ ಮಕ್ಕಳ ಜೀವನ

ನಿರ್ವಹಣೆಗಾಗಿ ರೂ.20,000/-ಗಳ ಪರಿಹಾರ ಧನವನ್ನು ಕುಟುಂಬದ ನಾಮ ನಿರ್ದೇಶಿತ ಸದಸ್ಯರಿಗೆ ಪಾವತಿಸಲಾಗುತ್ತಿದೆ. 2019-20ನೇ ಸಾಲಿನಲ್ಲಿ 1953 ಫಲಾನುಭವಿಗಳ ವಿಮಾ ಯೋಜನೆಗೆ ರೂ.3.64 ಲಕ್ಷಗಳನ್ನು ಭಾರತೀಯ ಜೀವ ವಿಮಾ ನಿಗಮಕ್ಕೆ ಪಾವತಿಸಲಾಗಿದೆ.

**5. ವಿಕಲಚೇತನ ವ್ಯಕ್ತಿಗಳನ್ನು ಸಾಮಾನ್ಯರು ಮದುವೆಯಾದಲ್ಲಿ ಪ್ರೋತ್ಸಾಹ ಧನ ನೀಡುವ ಯೋಜನೆ:**

ವಿಕಲಚೇತನ ಯುವಕ/ಯುವತಿಯರನ್ನು ವಿವಾಹವಾಗುವ ಸಾಮಾನ್ಯ ಯುವಕ/ ಯುವತಿಯರಿಗೆ ನಿರಂತರವಾಗಿ ಮಾಸಿಕ ಆದಾಯ ದೊರಕಿಸಲು ವಿಕಲಚೇತನ ವ್ಯಕ್ತಿಯ ಹೆಸರಿನಲ್ಲಿ ರೂ.50,000/-ಗಳನ್ನು ಮದುವೆಯಾದ ಸಾಮಾನ್ಯ ವ್ಯಕ್ತಿ ಹಾಗೂ ವಿಕಲಚೇತನರ ಜಂಟಿ ಹೆಸರಿನಲ್ಲಿ 05 ವರ್ಷದ ಅವಧಿಗೆ ಹೂಡಿಕೆಯ ರೂಪದಲ್ಲಿ ನೀಡಿ ಪ್ರೋತ್ಸಾಹ ನೀಡಲು ಹಾಗೂ ಅದರಿಂದ ಬರುವ ಬಡ್ಡಿ ಹಣವನ್ನು ಉಪಯೋಗಿಸುವುದು ಹಾಗೂ 05 ವರ್ಷಗಳ ನಂತರ ಠೇವಣಿ ಮೊತ್ತವನ್ನು ವಾಪಸ್ಸು ಪಡೆಯಬಹುದು ಅಥವಾ ಮುಂದುವರೆಸಲು ಅವಕಾಶವಿರುತ್ತದೆ. 2019-20ನೇ ಸಾಲಿನಲ್ಲಿ 736 ಫಲಾನುಭವಿಗಳಿಗೆ ಸೌಲಭ್ಯ ಕಲ್ಪಿಸಲಾಗಿದೆ.

**6. ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ ಆರೈಕೆ ಭತ್ಯೆ ಒದಗಿಸುವ ಯೋಜನೆ :**

ಅಂಧ ಮಹಿಳೆಯರು ಮಗುವಿಗೆ ಜನ್ಮ ನೀಡಿದಾಗ ಆ ಮಗುವನ್ನು ಇತರೆ ಸಾಮಾನ್ಯ ತಾಯಂದಿರಂತೆ ಆರೈಕೆ ಮಾಡುವುದು ಕಷ್ಟಕರವಾಗಿರುತ್ತದೆ. ಇಂತಹ ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ ಆರೈಕೆ ಮಾಡಲು ಆಯಾ ಸೇವೆ, ಆರೋಗ್ಯ ಪಾಲನೆ, ಪೌಷ್ಠಿಕ ಆಹಾರ, ಔಷಧೋಪಚಾರಗಳಿಗೆ ಮಾಹೆಯಾನ ರೂ.2000/- ದಂತೆ **5 ವರ್ಷಗಳ** ಅವಧಿಗೆ ಸಹಾಯಧನವನ್ನು ನೀಡಲಾಗುತ್ತಿದೆ. ಈ ಸೌಲಭ್ಯವನ್ನು ಕನಿಷ್ಠ 2 ಮಕ್ಕಳವರೆಗೆ ಪಡೆಯಬಹುದಾಗಿದೆ. 2019-20ನೇ ಸಾಲಿನಲ್ಲಿ 121 ಫಲಾನುಭವಿಗಳು ಸೌಲಭ್ಯ ಪಡೆದಿರುತ್ತಾರೆ.

**(ಡಿ) ಪುನರ್ವಸತಿ ಯೋಜನೆಗಳು:**

**1. ಅಂಗವಿಕಲರಿಗೆ ಸಾಧನ ಸಲಕರಣೆಗಳು :**

ಈ ಯೋಜನೆಯಡಿಯಲ್ಲಿ ಅಂಗವಿಕಲರಿಗೆ ಅವಶ್ಯವಾಗಿರುವ ಸಾಧನ ಸಲಕರಣೆಗಳನ್ನು ನೀಡಲಾಗುತ್ತಿದೆ. ಫಲಾನುಭವಿಯ ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ಗ್ರಾಮೀಣ ಪ್ರದೇಶದ ಫಲಾನುಭವಿಗಳಿಗೆ ರೂ.11,500/- ಮತ್ತು ನಗರ ಪ್ರದೇಶದ ಫಲಾನುಭವಿಗಳಿಗೆ ರೂ.24,000/- ನಿಗದಿಗೊಳಿಸಲಾಗಿದೆ. ಈ ಯೋಜನೆಯಡಿ ರೂ.15,000/-ಗಳ ಮಿತಿಯೊಳಗೆ ವಿಕಲಚೇತನರಿಗೆ ಅವಶ್ಯವಿರುವ ಕ್ಯಾಲಿಪರ್ಸ್, ಕ್ರಚರ್ಸ್, ಶ್ರವಣ ಸಾಧನ, ವೈಟ್ ಕೇನ್, ಬ್ರೈಲ್ ವಾಚ್ ಇನ್ನಿತರ ಸಲಕರಣೆಗಳನ್ನು ಉಚಿತವಾಗಿ ನೀಡಲಾಗುತ್ತಿದೆ. ಈ ಯೋಜನೆಯಡಿ ಕಳೆದ ಸಾಲಿನಲ್ಲಿ 5266 ವಿಕಲಚೇತನರು ವಿವಿಧ ಬಗೆಯ ಸಾಧನ ಸಲಕರಣೆಗಳನ್ನು ಪಡೆದಿರುತ್ತಾರೆ.

**ಅ. ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ಯೋಜನೆ :**

ಎಸ್.ಎಸ್.ಎಲ್.ಸಿ ನಂತರ ವ್ಯಾಸಂಗ ಮಾಡುವ ದೃಷ್ಠಿದೋಷವುಳ್ಳ ವಿಕಲಚೇತನ ವಿದ್ಯಾರ್ಥಿಗಳು ಇತ್ತೀಚಿನ ತಂತ್ರಜ್ಞಾನ ಮತ್ತು ತಂತ್ರಾಂಶದ ಉಪಯೋಗದಿಂದ ಉನ್ನತ ಶಿಕ್ಷಣವನ್ನು ಪಡೆಯಲು ಅನುಕೂಲವಾಗುವಂತೆ ಮಾತನಾಡುವ (ಟಾಕಿಂಗ್) ಲ್ಯಾಪ್‌ಟಾಪ್‌ಗಳನ್ನು ಅರ್ಹ ಫಲಾನುಭವಿಗಳಿಗೆ

ನೀಡಲಾಗುತ್ತಿದೆ. 2019-20ನೇ ಸಾಲಿನಲ್ಲಿ 374 ಫಲಾನುಭವಿಗಳು ಸದರಿ ಯೋಜನೆಯ ಪ್ರಯೋಜನವನ್ನು ಪಡೆದಿರುತ್ತಾರೆ.

ಆ. **ತೀವ್ರತರೆನಾದ ದೈಹಿಕ ವಿಕಲಚೇತನರಿಗೆ ಯಂತ್ರಚಾಲಿತ ದ್ವಿಚಕ್ರವಾಹನ ಯೋಜನೆ :**

20 ರಿಂದ 60 ವರ್ಷದ ವಯೋಮಾನದ ತೀವ್ರತರವಾದ ದೈಹಿಕ ವಿಕಲಚೇತನರ ಕುಟುಂಬದ ವಾರ್ಷಿಕ ವರಮಾನ ರೂ.2.00 ಲಕ್ಷಗಳಿಗಿಂತ ಕಡಿಮೆ ಇರುವ ವಿಕಲಚೇತನರಿಗೆ ಅನುಕೂಲವಾಗುವಂತೆ ಜೀವಿತ ಕಾಲದಲ್ಲಿ ಒಂದು ಬಾರಿ ಯಂತ್ರಚಾಲಿತ ದ್ವಿಚಕ್ರ ವಾಹನವನ್ನು ಒದಗಿಸಲಾಗುತ್ತಿದೆ. 2019-20ನೇ ಸಾಲಿನಲ್ಲಿ 1566 ಫಲಾನುಭವಿಗಳು ಸದರಿ ಯೋಜನೆಯ ಪ್ರಯೋಜನವನ್ನು ಪಡೆದಿರುತ್ತಾರೆ.

**2. ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರ ಯೋಜನೆ:-**

ವಿಕಲಚೇತನರನ್ನು ಗುರುತಿಸಿ ಅವರಿಗೆ ಶೈಕ್ಷಣಿಕ, ಉದ್ಯೋಗ ಮತ್ತು ತರಬೇತಿ, ಸಾಮಾಜಿಕ ಭದ್ರತೆ ಹಾಗೂ ಪುನರ್ವಸತಿ ಸೇವೆಗಳನ್ನು ಅವರ ಮನೆ ಬಾಗಿಲಿನಲ್ಲಿಯೇ ಒದಗಿಸಿ ಅವರ ಸರ್ವಾಂಗೀಣ ಪುನರ್ವಸತಿಯನ್ನು ಕಲ್ಪಿಸುವುದು ಈ ಯೋಜನೆಯ ಪ್ರಮುಖ ಉದ್ದೇಶವಾಗಿದೆ. ಈ ಯೋಜನೆಯಡಿ ವಿಕಲಚೇತನರಿಗೆ ಅಗತ್ಯವಿರುವ ವೈದ್ಯಕೀಯ ಸೇವೆ, ವೃತ್ತಿ ಚಿಕಿತ್ಸೆ, ವಿವಿಧ ರೀತಿಯ ಸಾಧನ ಸಲಕರಣೆಗಳನ್ನು ಕೇಂದ್ರಗಳಲ್ಲಿ ತಯಾರಿಸಿ ಒದಗಿಸಲಾಗುವುದು. ಪ್ರಸ್ತುತ 16 ಜಿಲ್ಲೆಗಳಲ್ಲಿ ಜಿಲ್ಲಾ ಪುನರ್ವಸತಿ ಕೇಂದ್ರಗಳು ನಡೆಯುತ್ತಿವೆ. (ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಬೆಳಗಾವಿ, ಬೀದರ್, ಚಿತ್ರದುರ್ಗ, ದಕ್ಷಿಣ ಕನ್ನಡ, ಮೈಸೂರು, ಉಡುಪಿ, ಹಾಸನ, ವಿಜಯಪುರ, ರಾಯಚೂರು, ಚಿಕ್ಕಮಗಳೂರು, ಬಳ್ಳಾರಿ, ಹಾವೇರಿ, ಚಾಮರಾಜನಗರ, ಗದಗ)

**3. ಅಂಗವಿಕಲತೆಯನ್ನು ನಿವಾರಿಸುವ ಶಸ್ತ್ರಚಿಕಿತ್ಸೆಗಾಗಿ ವೈದ್ಯಕೀಯ ಪರಿಹಾರ ನಿಧಿ ಯೋಜನೆ:-**

ಅಂಗವಿಕಲ ವ್ಯಕ್ತಿಗಳಿಗೆ ಅಂಗವಿಕಲತೆಯನ್ನು ನಿವಾರಿಸಲು ಶಸ್ತ್ರ ಚಿಕಿತ್ಸೆಗಾಗಿ ಸರ್ಕಾರಿ ಆಸ್ಪತ್ರೆ, ಸಂಜಯಗಾಂಧಿ ಆಸ್ಪತ್ರೆಗಳಲ್ಲಿ ಹಾಗೂ ಸುಸಜ್ಜಿತ ಖಾಸಗಿ ಆಸ್ಪತ್ರೆಗಳಲ್ಲಿ ಅಂಗವಿಕಲತೆ ನಿವಾರಣಾ ಶಸ್ತ್ರ ಚಿಕಿತ್ಸೆಗಾಗಿ ರೂ.1.00 ಲಕ್ಷಗಳವರೆಗೆ ಸಹಾಯ ಧನವನ್ನು ಮಂಜೂರು ಮಾಡಲಾಗುತ್ತಿದೆ. 2019-20ನೇ ಸಾಲಿನಲ್ಲಿ 83 ಫಲಾನುಭವಿಗಳು ಸದರಿ ಯೋಜನೆಯ ಪ್ರಯೋಜನವನ್ನು ಪಡೆದಿರುತ್ತಾರೆ.

**4. ಸಾಧನೆ ಮತ್ತು ಪ್ರತಿಭೆ ಯೋಜನೆ:**

ವಿಕಲಚೇತನ ಕ್ರೀಡಾಪಟುಗಳಿಗೆ ಪ್ರೋತ್ಸಾಹ ನೀಡಿ ಧನಸಹಾಯ ನೀಡಲು "ಸಾಧನೆ" ಎಂಬ ಯೋಜನೆಯು ಜಾರಿಯಲ್ಲಿದ್ದು, ಕ್ರೀಡೆಗಳಲ್ಲಿ ವಿಶೇಷ ಸಾಧನೆಗೈದ ವಿಕಲಚೇತನರಿಗೆ ರೂ.50,000/-ಗಳ ಧನ ಸಹಾಯವನ್ನು ನೀಡಲಾಗುತ್ತಿದೆ. 2019-20ನೇ ಸಾಲಿನಲ್ಲಿ 96 ಕ್ರೀಡಾಪಟುಗಳು ಸಹಾಯಧನವನ್ನು ಪಡೆದಿರುತ್ತಾರೆ.

ವಿಕಲಚೇತನರು ನೀಡುವ ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿ ಧನಸಹಾಯ ನೀಡುವ ಸಲುವಾಗಿ "ಪ್ರತಿಭೆ" ಎಂಬ ಯೋಜನೆಯು ಜಾರಿಯಲ್ಲಿದ್ದು, ವೈಯಕ್ತಿಕ ಸಾಂಸ್ಕೃತಿಕ ರೂ.2,000/-ಗಳು ಹಾಗೂ ಸಮೂಹ ಕಾರ್ಯಕ್ರಮಕ್ಕೆ ರೂ.10,000/-ಗಳ ಪ್ರೋತ್ಸಾಹಧನ ನೀಡಲಾಗುತ್ತದೆ.

**5. ನಿರಾಮಯ ಆರೋಗ್ಯ ವಿಮಾ ಯೋಜನೆ :**

ಬುದ್ಧಿಮಾಂದ್ಯ, ಸೆರಬ್ರಲ್ ಪಾಲ್ಸಿ, ಆಟಿಸಂ ಮತ್ತು ಬಹುವಿಧ ಅಂಗವಿಕಲತೆಗೆ ಒಳಗಾದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ ವಿಕಲಚೇತನರಿಗೆ ನಿರಾಮಯ ಎಂಬ ಆರೋಗ್ಯ ವಿಮಾ ಯೋಜನೆಯು ಜಾರಿಯಲ್ಲಿದ್ದು, ಮೇಲೆ ವಿವರಿಸಿದ ಅಂಗವಿಕಲತೆ ಹೊಂದಿರುವ ಪ್ರತಿ ವ್ಯಕ್ತಿಗೆ ವರ್ಷಕ್ಕೆ ಒಂದು ಸಾರಿಗೆ ಪ್ರೀಮಿಯಂ ಮೊತ್ತ ರೂ.250/-ಗಳನ್ನು ಅಧಿಕೃತ ಸಂಸ್ಥೆಗೆ ಪಾವತಿಸಲಾಗುವುದು. ಪ್ರತಿ ವರ್ಷ ಯೋಜನೆಯಡಿ ಬರುವ ಫಲಾನುಭವಿಗಳು ರೂ.1.00 ಲಕ್ಷಗಳವರೆಗೆ ವೈದ್ಯಕೀಯ ಸೌಲಭ್ಯ ಪಡೆಯಬಹುದಾಗಿರುತ್ತದೆ. 2019-20ನೇ ಸಾಲಿನಲ್ಲಿ 684 ಫಲಾನುಭವಿಗಳು ಸೌಲಭ್ಯವನ್ನು ಪಡೆದಿದ್ದು, ಎ.ಪಿ.ಡಿ ಸಂಸ್ಥೆಯು ನೋಡಲ್ ಏಜೆನ್ಸಿಯಾಗಿ ಕಾರ್ಯನಿರ್ವಹಿಸುತ್ತಿದೆ.

7. **ಸ್ಪರ್ಧಾ ಚೇತನ:-**

ಈ ಯೋಜನೆಯಡಿ ವಿಶೇಷ ಸಾಮರ್ಥ್ಯ/ಭಿನ್ನ ಸಾಮರ್ಥ್ಯದ ವಿದ್ಯಾವಂತ ವ್ಯಕ್ತಿಗೆಗಳಿಗೆ ಐ.ಎ.ಎಸ್./ಕೆ.ಎ.ಎಸ್. ಹಾಗೂ ಇತರೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಸರ್ಕಾರದ ಇತರೆ ಇಲಾಖೆಗಳಡಿ ಗುರುತಿಸಲ್ಪಟ್ಟ ಪೂರ್ವ ಪರೀಕ್ಷಾ ತರಬೇತಿ ಕೇಂದ್ರಗಳು ಹಾಗೂ ಈ ಇಲಾಖೆಯಿಂದ ಗುರುತಿಸಲ್ಪಟ್ಟ ತರಬೇತಿ ಕೇಂದ್ರಗಳ ಮೂಲಕ ತರಬೇತಿಯನ್ನು ಉಚಿತವಾಗಿ ನೀಡಲಾಗುತ್ತಿದೆ. ಕಳೆದ ಸಾಲಿನಲ್ಲಿ 3 ಫಲಾನುಭವಿಗಳು ತರಬೇತಿಯನ್ನು ಪಡೆದಿರುತ್ತಾರೆ.

8. **ನಿರುದ್ಯೋಗ ಭತ್ಯೆ:-** ಎಸ್.ಎಸ್.ಎಲ್.ಸಿ ಹಾಗೂ ನಂತರ ವ್ಯಾಸಂಗ ಮಾಡಿರುವ ನಿರುದ್ಯೋಗಿ ವಿಕಲಚೇತನರಿಗೆ ಮಾಸಿಕ ರೂ.1000/-ಗಳ ನಿರುದ್ಯೋಗ ಭತ್ಯೆಯನ್ನು ಮಂಜೂರು ಮಾಡಲಾಗುತ್ತಿದೆ. ಕಳೆದ ಸಾಲಿನಲ್ಲಿ 22 ಫಲಾನುಭವಿಗಳು ನಿರುದ್ಯೋಗ ಭತ್ಯೆಯನ್ನು ಪಡೆದಿರುತ್ತಾರೆ.

**(ಇ) ಸಾರ್ವಜನಿಕ ಅರಿವು ಮೂಡಿಸುವ ಯೋಜನೆಗಳು:**

**1. ವಿಕಲಚೇತನರ ಮಾಹಿತಿ ಸಲಹಾ ಕೇಂದ್ರ :**

ಅಂಗವಿಕಲರಿಗೆ ಲಭ್ಯವಿರುವ ರಾಜ್ಯ ಸರ್ಕಾರದ ಹಾಗೂ ಕೇಂದ್ರ ಸರ್ಕಾರದ ಯೋಜನೆಗಳ ಹಾಗೂ ವಿಶೇಷ ಶಾಲೆಗಳು ಹಾಗೂ ವೃತ್ತಿ ತರಬೇತಿ ಸಂಸ್ಥೆಗಳ ಬಗ್ಗೆ ಮಾಹಿತಿಯನ್ನು ಒದಗಿಸಲು ನಿರ್ದೇಶನಾಲಯದಲ್ಲಿ ಹಾಗೂ ರಾಜ್ಯದ 30 ಜಿಲ್ಲೆಗಳಲ್ಲಿ ವಿಕಲಚೇತನರ ಸಹಾಯವಾಣಿ / ಮಾಹಿತಿ ಕೇಂದ್ರಗಳನ್ನು ನಡೆಸಲಾಗುತ್ತಿದೆ. ಈ ಕೇಂದ್ರಗಳಲ್ಲಿ ಒಳ್ಳೆಯ ಗುಣ ಮಟ್ಟದ ಕೃತಕಾಂಗಗಳು ದೊರೆಯುವ ಮಾಹಿತಿ ಹಾಗೂ ಅಂಗವಿಕಲರಿಗೆ ಬೇಕಾಗಿರುವ ಮಾಹಿತಿಗಳನ್ನು ಮತ್ತು ಇದರ ಜೊತೆಗೆ ರಾಜ್ಯ ಸರ್ಕಾರ, ಕೇಂದ್ರ ಸರ್ಕಾರ, ಸಾರ್ವಜನಿಕ ಉದ್ಯಮ ಹಾಗೂ ಖಾಸಗಿ ಉದ್ಯಮಗಳಲ್ಲಿ ಅಂಗವಿಕಲರಿಗೆ ಉದ್ಯೋಗ ಅವಕಾಶಗಳ ಬಗ್ಗೆ ಮಾಹಿತಿಯನ್ನು ನೀಡಲಾಗುವುದು.

2) **ವಿಕಲಚೇತನರಿಗೆ ಗುರುತಿನ ಚೀಟಿ ನೀಡುವ ಯೋಜನೆ:-**

ಈ ಯೋಜನೆಯಡಿಯಲ್ಲಿ ವಿಕಲಚೇತನ ವ್ಯಕ್ತಿಗಳಿಗೆ ಗುರುತಿನ ಚೀಟಿಗಳನ್ನು ನೀಡಲಾಗುತ್ತಿದೆ. ಈ ಗುರುತಿನ ಚೀಟಿಯನ್ನು ವಿವಿಧ ಸರ್ಕಾರಿ ಸೌಲಭ್ಯಗಳನ್ನು ಪಡೆಯಲು ಉಪಯೋಗಿಸಿಕೊಳ್ಳಬಹುದಾಗಿದೆ. **ವಿಕಲಚೇತನರಿಗೆ ವಿಶಿಷ್ಟ ಗುರುತಿನ ಚೀಟಿ (UNIQUE DISABILITY ID)** ನೀಡುವ ಯೋಜನೆಯು ಕೇಂದ್ರ ಸರ್ಕಾರ ಪ್ರಾಯೋಜಿತ ಯೋಜನೆಯಾಗಿದೆ. ರಾಜ್ಯ ಸರ್ಕಾರದಿಂದ ನೇಮಿಸಲಾಗುವ ವೈದ್ಯಕೀಯ ಪ್ರಾಧಿಕಾರಗಳಿಂದ ದೃಢೀಕರಿಸಲಾಗುವ ವೈದ್ಯಕೀಯ ಪ್ರಮಾಣ ಪತ್ರದ ಸಮಗ್ರ ಮಾಹಿತಿಯುಳ್ಳ ಗಣಕೀಕೃತ

ಗುರುತಿನ ಚೀಟಿಯನ್ನು ವಿಕಲಚೇತನ ವ್ಯಕ್ತಿಗಳಿಗೆ ನೀಡುವ ವ್ಯವಸ್ಥೆಯಾಗಿದ್ದು, ಇದರಲ್ಲಿ ವಿಕಲಚೇತನ ವ್ಯಕ್ತಿಯ ವಿವರಗಳು ಹಾಗೂ ಅವರಲ್ಲಿರುವ ವಿಕಲತೆಯ ವಿವರ ಮತ್ತು ಪ್ರಮಾಣವನ್ನು ನಮೂದಿಸಲಾಗಿರುತ್ತದೆ. ಇಲ್ಲಿಯವರೆಗೆ **232872** ಕಾರ್ಡ್‌ಗಳನ್ನು ವಿತರಿಸಲಾಗಿರುತ್ತದೆ.

3). **ವಿಕಲಚೇತನರಿಗೆ ರಿಯಾಯಿತಿ ದರದ ಬಸ್ ಪಾಸ್:**

ಈ ಯೋಜನೆಯಡಿ ವಿಕಲಚೇತನರಿಗೆ 100 ಕಿ.ಮೀ. ವ್ಯಾಪ್ತಿಯೊಳಗೆ ಸಂಚರಿಸಲು ವಾರ್ಷಿಕ ರೂ.660/- ರಿಯಾಯಿತಿ ದರದಲ್ಲಿ ಬಸ್ ಪಾಸ್‌ಗಳನ್ನು ಕೆ.ಎಸ್.ಆರ್.ಟಿ.ಸಿ ಹಾಗೂ ಬಿ.ಎಂ.ಟಿ.ಸಿ ವತಿಯಿಂದ ವಿತರಿಸಲಾಗುತ್ತಿದೆ ಪೂರ್ಣ ಅಂಧರು ಉಚಿತವಾಗಿ ರಾಜ್ಯದಲ್ಲಿ ಸಂಚಾರಿಸಲು ಅವಕಾಶವಿರುತ್ತದೆ.

## ಹಿರಿಯ ನಾಗರಿಕರಿಗಾಗಿ ಜಾರಿಗೊಳಿಸುತ್ತಿರುವ ಯೋಜನೆಗಳು

**ಹಗಲು ಯೋಗಕ್ಷೇಮ ಕೇಂದ್ರಗಳು:**

ರಾಜ್ಯದ 30 ಜಿಲ್ಲೆಗಳಿಗೆ ಹಗಲು ಯೋಗಕ್ಷೇಮ ಕೇಂದ್ರಗಳನ್ನು ಸ್ಥಾಪಿಸಲು ಸರ್ಕಾರದ ಮಂಜೂರಾತಿ ದೊರೆತಿದ್ದು, ಪ್ರತಿ ಕೇಂದ್ರದಲ್ಲಿ ಸುಮಾರು 50-150 ಫಲಾನುಭವಿಗಳಿಗೆ ಅವಕಾಶ ಕಲ್ಪಿಸಿಕೊಡಲಾಗಿದ್ದು, ಸದರಿ ಯೋಜನೆಗೆ ಸರ್ಕಾರದಿಂದ ವಾರ್ಷಿಕ ರೂ.11.20 ಲಕ್ಷಗಳ ಅನುದಾನವನ್ನು ಮಂಜೂರು ಮಾಡಲಾಗುತ್ತದೆ.

1. **ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರಗಳು:**

ಹಿರಿಯ ನಾಗರಿಕರು ಕಿರುಕುಳ, ಹಣಕಾಸಿನ ಶೋಷಣೆ, ಮಾನಸಿಕ ತುಮುಲ ಮತ್ತು ದುರ್ಬಲರಾಗಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದು, ಇಂತಹ ಸಮಸ್ಯೆಗಳ ನಿವಾರಣೆಗಾಗಿ ಹಾಗೂ ತುರ್ತು ಸಹಾಯಕ್ಕಾಗಿ ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರಗಳನ್ನು ರಾಜ್ಯದ 30 ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲು ಬೆಳಗಾವಿ ಮತ್ತು ಕಲಬುರಗಿ ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ 28 ಜಿಲ್ಲೆಗಳಲ್ಲಿ ಸಹಾಯವಾಣಿ ಕೇಂದ್ರಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳ ಕಛೇರಿ ಆವರಣದಲ್ಲಿ, ಸ್ವಯಂ ಸೇವಾ ಸಂಸ್ಥೆಗಳ ಸಹಯೋಗದಿಂದ ನಡೆಸಲಾಗುತ್ತಿದೆ.

2. **ಹಿರಿಯ ನಾಗರಿಕರ ವೃದ್ಧಾಶ್ರಮ:**

ರಾಜ್ಯದ 30 ಜಿಲ್ಲೆಗಳಲ್ಲಿ ನಿರ್ಗತಿಕ ಹಿರಿಯ ನಾಗರಿಕರಿಗಾಗಿ ವೃದ್ಧಾಶ್ರಮಗಳನ್ನು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿದ್ದು, ಈ ವೃದ್ಧಾಶ್ರಮದಲ್ಲಿ 25 ನಿರ್ಗತಿಕ ಹಿರಿಯ ನಾಗರಿಕರನ್ನು ದಾಖಲಿಸಿಕೊಳ್ಳಲು ಅವಕಾಶವಿದ್ದು, ಒಂದು ವೃದ್ಧಾಶ್ರಮದ ನಿರ್ವಹಣೆಗಾಗಿ ವಾರ್ಷಿಕ ರೂ.8.00ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದ್ದು, ಇದರಲ್ಲಿ ಸಿಬ್ಬಂದಿ ವೆಚ್ಚ, ನಿರ್ವಹಣಾ ವೆಚ್ಚ, ಔಷಧಿ, ಕಟ್ಟಡ ಬಾಡಿಗೆ, ವೃತ್ತ ಪತ್ರಿಕೆ ಹಾಗೂ ಇತರೆ ವೆಚ್ಚಗಳಿಗಾಗಿ ಒಟ್ಟು ಯೋಜನಾ ವೆಚ್ಚದ ಶೇ.90ರಷ್ಟು ಅನುದಾನವನ್ನು ಸ್ವಯಂ ಸೇವಾ ಸಂಸ್ಥೆಗಳಿಗೆ ನೀಡಲಾಗುತ್ತಿದ್ದು ಉಳಿದ ಶೇ.10ರಷ್ಟನ್ನು ಸಂಸ್ಥೆಯು ಭರಿಸಬೇಕಾಗುತ್ತದೆ. ಅನುದಾನವನ್ನು ಜಿಲ್ಲಾ ಪಂಚಾಯತ್, ಮೂಲಕ ಮಂಜೂರು ಮಾಡಲಾಗುತ್ತಿದೆ.

ರಾಜ್ಯದ ಪ್ರತಿ ಕಂದಾಯ ಉಪ ವಿಭಾಗದಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ವೃದ್ಧಾಶ್ರಮಗಳನ್ನು ಪ್ರಾರಂಭಿಸಲು ಅವಕಾಶವಿದ್ದು, ಪ್ರಸ್ತುತ 8 ಕಂದಾಯ ಉಪ ವಿಭಾಗಕ್ಕೆ ವೃದ್ಧಾಶ್ರಮ ನಡೆಸಲು ಆಡಳಿತಾತ್ಮಕ ಮಂಜೂರಾತಿ ದೊರೆತ್ತಿರುತ್ತದೆ.

**3. ಹಿರಿಯ ನಾಗರಿಕರಿಗೆ ಗುರುತಿನ ಚೀಟಿಗಳು:**

60 ವರ್ಷ ಮೇಲ್ಪಟ್ಟ ವಯೋಮಾನದ ಹಿರಿಯ ನಾಗರಿಕರ ಗುರುತಿನ ಚೀಟಿ ಪಡೆಯಲು ಸೇವಾ ಸಿಂಧು ಆನ್‌ಲೈನ್ ತಂತ್ರಾಂಶವನ್ನು ಅಭಿವೃದ್ಧಿ ಪಡಿಸಲಾಗಿದ್ದು, ದಿ:01.10.2018ರಿಂದ ಹಿರಿಯ ನಾಗರಿಕರು ಸೇವಾ ಸಿಂಧು ಆನ್‌ಲೈನ್ ಮೂಲಕ ಅರ್ಜಿಯನ್ನು ಸಲ್ಲಿಸಿ ಹಿರಿಯ ನಾಗರಿಕರ ಗುರುತಿನ ಚೀಟಿಯನ್ನು ಪಡೆಯಬಹುದಾಗಿದೆ.

## 3. ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

1. ದೇವದಾಸಿ ಪನರ್ವಸತಿ ಯೋಜನೆ
2. ಮಾಜಿ ದೇವದಾಸಿಯರಿಗೆ ಮಾಸಾಶನ
3. ಉದ್ಯೋಗಿನಿ ಯೋಜನೆ
4. ಕಿರುಸಾಲ ಯೋಜನೆ
5. ಧನಶ್ರೀ ಯೋಜನೆ
6. ಚೇತನ ಯೋಜನೆ
7. ಲಿಂಗತ್ವ ಅಲ್ಪಸಂಖ್ಯಾತರ ಪುನರ್ವಸತಿ ಯೋಜನೆ
8. ಮಹಿಳಾ ತರಬೇತಿ ಯೋಜನೆ
9. ಬಡ್ಡಿಸಹಾಯಧನ ಯೋಜನೆ (ಕೆ.ಎಸ್.ಎಫ್.ಸಿ ಮುಖಾಂತರ)

## 4. ಬಾಲಭವನ ಸೊಸೈಟಿ

ಬಾಲಭವನ ವತಿಯಿಂದ 05 ರಿಂದ 16 ವರ್ಷದ ಮಕ್ಕಳಿಗಾಗಿ ವಾರಾಂತ್ಯ / ಬೇಸಿಗೆ ಶಿಬಿರದಡಿ ಸೃಜನಾತ್ಮಕ ಹಾಗೂ ಕ್ರಿಯಾತ್ಮಕ ಚಟುವಟಿಕೆಗಳಾದ ಚಿತ್ರಕಲೆ, ಕರಕುಶಲೆ, ನೃತ್ಯ ಸಂಗೀತ, ನಾಟಕ ಇತ್ಯಾದಿ ಹಾಗೂ ಇದರೊಂದಿಗೆ ಬಾಲ ಬಾಲವೇದಿಕೆ, ಅಭಿರಂಗ ರಾಷ್ಟ್ರೀಯ ಹಬ್ಬಗಳ ಆಚರಣೆ, ರಾಜ್ಯ ಮಟ್ಟದ ಕಲಾಶ್ರೀ ಆಯ್ಕೆ ಶಿಬಿರ, ವಿಶೇಷ ಮಕ್ಕಳಿಗೆ ವಿವಿಧ ಕಾರ್ಯಕ್ರಮ, ಕಾರ್ಯಗಾರ ಇತ್ಯಾದಿ ಕಾರ್ಯಕ್ರಮಗಳನ್ನು ಕ್ರಿಯಾಯೋಜನೆಯಂತೆ ಹಮ್ಮಿಕೊಳ್ಳಲಾಗುತ್ತಿದೆ.

*******